ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತನೆಯ ಅಧಿವೇಶನ
ಬುಧವಾರ, ದಿನಾಂಕ : 18 ನೇ ಮಾರ್ಚ್, 2020

ಟರ್ಫ್ ಕ್ಲಬ್ ಕುರಿತು

ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) ಮತ್ತು ಶ್ರೀ ಎಂ.ಸಿ. ವೇಣುಗೋಪಾಲ್ (ವಿಧಾನಸಭೆಯಿಂದ ಚುನಾಯಿತರಾದವರು):-

1138 (1317+1323) ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಲೋಕೋಪಯೋಗಿ ಮತ್ತು ಸಮಾಜ ಕಲ್ಯಾಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ನಗರದ ಹೃದಯ ಭಾಗದಲ್ಲಿರುವ ರೇಸ್‌ಕೋರ್ಸ್‌ಗೆ ಗುತ್ತಿಗೆ ಆಧಾರದ ಮೇಲೆ ನೀಡಿರುವ ಜಮೀನಿನ ವಿಸ್ತೀರ್ಣವೆಷ್ಟು ; ಗುತ್ತಿಗೆÀ ಅವಧಿಯನ್ನು ಯಾವ ಅವಧಿಯವರೆಗೂ ನೀಡಲಾಗಿದೆ;

(ಆ) ಕುದುರೆ ಜೂಜಿಗಾಗಿ ನೀಡಿರುವ ಸದರಿ ಜಾಗವನ್ನು ಬಾಡಿಗೆಗೆ ನೀಡಲಾಗಿದೆಯೇ ; ಅಥವಾ ಲೀಸ್‌ಗೆ ನೀಡಲಾಗಿದೆಯೇ ; ಲೀಸ್‌ಗೆ ನೀಡಿದಲ್ಲಿ, ಎಷ್ಟು ವರ್ಷದವರೆಗೆ ನೀಡಲಾಗಿದೆ ; ಲೀಸ್‌ನ ಮೊತ್ತವೆಷ್ಟು ;

(ಇ) ಟರ್ಫ್ ಸಂಸ್ಥೆಯು ಗುತ್ತಿಗೆ ಬಾಡಿಗೆಯನ್ನು ಕಾಲಕಾಲಕ್ಕೆ ನೀಡುತ್ತಿದೆಯೇ ; ಇಲ್ಲವಾದಲ್ಲಿ, ಸಂಸ್ಥೆಯಿಂದ ಬಾಕಿಯಿರುವ ಮೊತ್ತವೆಷ್ಟು ; ಸರ್ಕಾರವು ಬಾಕಿ ಮೊತ್ತವನ್ನು ವಸೂಲಾತಿ ಮಾಡಲು ಕೈಗೊಂಡಿರುವ ಕ್ರಮಗಳೇನು ;

(ಈ) ನಗರದ ಮಧ್ಯ ಭಾಗದಲ್ಲಿರುವ ದೊಡ್ಡ ಜಮೀನನ್ನು ನಗರದ ಅಭಿವೃದ್ಧಿಗೆ ಉಪಯೋಗಿಸವುದರ ಬದಲಾಗಿ ಜೂಜಿಗೆ ಕೊಡುವುದನ್ನು ಸಮಂಜಸವೆಂದು ಸರ್ಕಾರ ಭಾವಿಸಿದೆಯೇ; ಹಾಗಿದ್ದಲ್ಲಿ, ಇದÀರಿಂದÀ ಸಮಾಜಕ್ಕಾಗುವ ಉಪಯೋಗವೇನು;

(ಉ) ರೇಸ್‌ಕೋರ್ಸ್‌ನ್ನು ಸ್ಥಳಾಂತರಿಸಲು ಸರ್ಕಾರದ ಮುಂದೆ ಯಾವುದಾದರೂ ಪ್ರಸಾವನೆÀ ಇದೆಯೇ ; ಇದ್ದಲ್ಲಿ, ಅದರ ಮಾಹಿತಿಯನ್ನು ಒದಗಿಸುವುದು ;

(ಊ) ಟರ್ಫ್ ಕ್ಲಬ್ ಸಂಸ್ಥೆಯ ಮೇಲೆ ರಾಜ್ಯ ಸರ್ಕಾರದ ವಾಣಿಜ್ಯ ತೆರಿಗೆ ಇಲಾಖೆಯು ದಾಳಿ ನಡೆಸಿ, ದಾಖಲೆಗಳನ್ನು ವಶಪಡಿಸಿಕೊಂಡಿರುವ ಬಗ್ಗೆ ಟಿ.ವಿ. ಮಾಧ್ಯಮ/ ವೃತ್ತ ಪತ್ರಿಕೆಗಳಲ್ಲಿ ವರದಿಯಾಗಿರುವುದು ನಿಜವೇ ; ನಿಜವಾದಲ್ಲಿ, ಈ ಬಗ್ಗೆ ಸ್ಪಷ್ಟ ಮಾಹಿತಿಯನ್ನು ನೀಡುವುದು ;

(ಋ) ಟರ್ಫ್ ಕ್ಲಬ್ ಸಂಸ್ಥೆಗೆ ಕುದುರೆ ಓಟದ ಬಗ್ಗೆ ಯಾವ ಅವಧಿಯವರೆಗೂ ಸರ್ಕಾರದಿಂದ ಪರವಾನಗಿ ನೀಡಲಾಗಿದೆ ;

(ಎ) ಸದರಿ ರೇಸ್ ಕೋರ್ಸ್‌ನ್ನು ನಗರದ ಹೊರಭಾಗಕ್ಕೆ ಸ್ಥಳಾಂತರಿಸಬೇಕೆಂಬ ವಿಷಯ ಸಾರ್ವಜನಿಕರಿಂದ ಹಾಗೂ ಸದನದಲ್ಲೂ ಕೂಡ ಅನೇಕ ಬಾರಿ ಚರ್ಚೆಯಾಗಿದ್ದು, ಈ ಕುರಿತು ಸರ್ಕಾರದ ನಿಲುವೇನು ?